# ಪ್ರಾಥಮಿಕ ಶಿಕ್ಷಣದಲ್ಲಿ ಇತಿಹಾಸವನ್ನು ಕಲಿಸುವ ಗುರಿ

ಇತಿಹಾಸವನ್ನು ಕೇವಲ ಗತಕಾಲದ ದಾಖಲೆಯೆಂದಷ್ಟೇ ಪರಿಗಣಿಸಿದರೆ ಪ್ರಾಥಮಿಕ ಶಿಕ್ಷಣದ ಪಠ್ಯಕ್ರಮದಲ್ಲಿ ಅದಕ್ಕೊಂದು ಮಹತ್ತರ ಪಾತ್ರವಿದೆ ಎಂಬುದನ್ನು ಕಂಡಕೊಳ್ಳುವುದು ಕಷ್ಟವಾಗುತ್ತದೆ. ಗತವು ಗತವಷ್ಟೇ, ಮತ್ತು ಅಳಿದುಹೋದದ್ದನ್ನು ಹೂತುಹಾಕೋಣ. ವರ್ತಮಾನದ ತುರ್ತಿನ ಬೇಡಿಕೆಗಳು ಲೆಕ್ಕವಿಲ್ಲದಷ್ಟಿದ್ದು, ಭವಿಷ್ಯದ ಹೊಸ್ತಿಲಲ್ಲಿ ನಮ್ಮ ಗಮನವನ್ನು ಕೋರುವ ವಿಷಯಗಳು ಲೆಕ್ಕವಿಲ್ಲದಷ್ಟು ಇರುವಾಗ ಮಗು ಶಾಶ್ವತವಾಗಿ ಅಳಿದುಹೋದ ಸಂಗತಿಗಳಲ್ಲಿ ಆಳವಾಗಿ ಮುಳುಗಲು ಸಾಧ್ಯವಿಲ್ಲ. ಆದರೆ ಇತಿಹಾಸವನ್ನು ಸಾಮಾಜಿಕ ಬದುಕಿನ ಶಕ್ತಿ ಮತ್ತು ರೂಪಗಳ ವಿವರವೆಂಬಂತೆ ಕಂಡಾಗ ಅದು ಹಾಗಾಗಿರುವುದಿಲ್ಲ. ಸಾಮಾಜಿಕ ಬದುಕು ನಮ್ಮೊಂದಿಗೆ ಸದಾ ಇರುತ್ತದೆ; ಗತ ಮತ್ತು ವರ್ತಮಾನವೆಂಬ ಭಿನ್ನತೆಯು ಅದಕ್ಕೆ ನಿರಪೇಕ್ಷವಾಗಿರುತ್ತದೆ. ಅದನ್ನು ಇಲ್ಲಿ ಬದುಕಿದೆವೋ ಅಥವಾ ಅಲ್ಲಿ ಬದುಕಿದೆವೋ ಎಂಬುದು ಕೇವಲ ಕಾಲ ಸಂಬಂಧಿ ವಿಷಯ. ಆದರೆ ನಿಸ್ಸಂದೇಹವಾಗಿ ಅದು ಜೀವನ; ಮನುಷ್ಯರನ್ನು ಒಂದೆಡೆ ತರುವ ಮತ್ತು ಬೇರ್ಪಡಿಸುವ ಉದ್ದೇಶಗಳನ್ನು ಅದು ತೋರಿಸುತ್ತದೆ, ಹಾಗೂ ಯಾವುದು ಅಪೇಕ್ಷಣೀಯವೋ ಮತ್ತು ಯಾವುದು ನೋವನ್ನುಂಟು ಮಾಡುತ್ತದೆಯೋ ಅದನ್ನು ಚಿತ್ರಿಸುತ್ತದೆ. ವೈಜ್ಞಾನಿಕ ದೃಷ್ಟಿಕೋನವನ್ನು ಹೊಂದಿದ ಇತಿಹಾಸಕಾರನಿಗೆ ಇತಿಹಾಸವೆಂದರೆ ಏನೇ ಆಗಿರಲಿ ಒಬ್ಬ ಶಿಕ್ಷಕನಿಗೆ ಮಾತ್ರ ಅದು ಅಪರೋಕ್ಷವಾಗಿ ಸಮಾಜಶಾಸ್ತ್ರೀಯ ಅಧ್ಯಯನವಾಗಿರಬೇಕು —ತಾನು ರೂಪುಗೊಳ್ಳುವುದರ ಪ್ರಕ್ರಿಯೆಗಳನ್ನು ಮತ್ತು ತಾನು ಸಂಘಟಿತವಾಗುವ ಬಗೆಗಳನ್ನು ತೆರೆದಿಡುವ ಸಮಾಜದ ಒಂದು ಅಧ್ಯಯನವಾಗಿರಬೇಕು. ಸಮಕಾಲೀನ ಸಮಾಜವು ಮಗುವಿಗೆ ಅತಿ ಹತ್ತಿರದಲ್ಲಿದ್ದು, ಸಂಕೀರ್ಣವಾಗಿರುವುದರಿಂದ, ಅದನ್ನು ಅಧ್ಯಯನ ಮಾಡುವುದು ಕಷ್ಟ. ಆತನಿಗೆ ಅದರ ವಿವರಗಳ ತೊಡಕಾದ ರಚನೆಯೊಳಗೆ ಯಾವ ಸುಳಿವೂ ಸಿಗುವುದಿಲ್ಲ ಮತ್ತು ಅದರ ರಚನೆಯಿಂದ ಒಂದು ವಿಶಿಷ್ಟ ದೃಷ್ಟಿಕೋನವನ್ನು ಪಡೆಯುವುದಿಲ್ಲ.

ಒಂದು ವೇಳೆ ಇತಿಹಾಸದ ಬೋಧನೆಯ ಗುರಿಯು ಮಗುವೊಂದು ಸಾಮಾಜಿಕ ಬದುಕಿನ ಮೌಲ್ಯಗಳನ್ನು ಅರಿಯುವಂತೆ ಮಾಡುವುದೇ ಆಗಿದ್ದರೆ, ಮನುಷ್ಯನನ್ನು ಬೆಂಬಲಿಸುವ ಮತ್ತು ಪರಸ್ಪರ ಒಬ್ಬರಿಗೊಬ್ಬರು ಪರಿಣಾಮಕಾರಿಯಾಗಿ ಸಹಕರಿಸುವ ಅಂಶಗಳನ್ನು ಕಲ್ಪಿಸಿಕೊಳ್ಳುವಂತೆ ಮಾಡುವುದೇ ಆಗಿದ್ದರೆ, ನಮಗೆ ಸಹಾಯ ಮಾಡುವ ಮತ್ತು ಅಡ್ಡಿ ಮಾಡುವ ವಿಭಿನ್ನ ಗುಣಲಕ್ಷಣಗಳನ್ನು ತಿಳಿದುಕೊಳ್ಳುವಂತೆ ಮಾಡುವುದೇ ಆಗಿದ್ದರೆ, ಅದನ್ನು ಚಲನಶೀಲವಾಗಿ ಹಾಗೂ ಕ್ರಿಯಾತ್ಮಕವಾಗಿ ನಿರೂಪಿಸುವುದು ಅವಶ್ಯವಾಗಿರುತ್ತದೆ. ಇತಿಹಾಸವನ್ನು, ಸಾಧನೆ ಅಥವಾ ಪರಿಣಾಮಗಳ ಶೇಖರಣೆ, ಸಂಭವಿಸಿದ್ದ ಘಟನೆಗಳ ಬಗ್ಗೆ ಕೇವಲ ಒಂದು ಹೇಳಿಕೆಯಾಗಿ ಪ್ರಸ್ತುತಪಡಿಸುವುದರ ಬದಲು ಅದೊಂದು ಪರಿಣಾಮಕಾರಿಯಾದ ಸಕ್ರಿಯ ಶಕ್ತಿ ಎಂದು ಪ್ರಸ್ತುತಪಡಿಸುವ ಅಗತ್ಯವಿದೆ. ಪ್ರೇರಣೆಗಳು – ಅಂದರೆ ಅದರ ಪ್ರೇರಕ ಶಕ್ತಿಗಳು ಎದ್ದುಕಾಣಿಸುವಂತಿರಬೇಕು. ಇತಿಹಾಸದ ಅಧ್ಯಯನವೆಂದರೆ ಮಾಹಿತಿಯನ್ನು ಶೇಖರಿಸುವುದಲ್ಲ, ಬದಲಾಗಿ ಮಾಹಿತಿಯನ್ನು ಬಳಸಿಕೊಂಡು ಗತಕಾಲದಲ್ಲಿ ಮನುಷ್ಯರು ಯಾಕೆ ಒಂದು ನಿರ್ದಿಷ್ಟ ರೀತಿಯಲ್ಲಿ ನಡೆದುಕೊಂಡರು, ಅದರ ಹಿಂದಿರುವ ಕಾರಣಗಳೇನು; ಅವರು ಹೇಗೆ ಯಶಸ್ಸನ್ನು ಸಾಧಿಸಿದರು ಮತ್ತು ಸೋಲುಗಳನ್ನು ಕಂಡರು ಎಂಬುದರ ಒಂದು ನಿಚ್ಚಳ ಚಿತ್ರಣವನ್ನು ಕಟ್ಟಿಕೊಡಬೇಕು.

ಇತಿಹಾಸವನ್ನು ಕ್ರಿಯಾತ್ಮಕವೆಂಬಂತೆ, ಅದೊಂದು ಚಲನಶೀಲ ಪ್ರಕ್ರಿಯೆ ಎಂಬಂತೆ ಕಲ್ಪಿಸಿಕೊಂಡಾಗ ಅದರ ಆರ್ಥಿಕ ಮತ್ತು ಔದ್ಯಮಿಕ ಅಂಶಗಳಿಗೆ ಒತ್ತು ಸಿಗುತ್ತದೆ. ಇವೆಲ್ಲ ಮನುಕುಲವು ನಿರಂತರವಾಗಿ ಸೆಣೆಸಾಡುತ್ತಿರುವ ಸಮಸ್ಯಗಳಾದ ಬದುಕುವುದು ಹೇಗೆ, ಮನುಷ್ಯ ಜೀವನವನ್ನು ಶ್ರಿಮಂತಗೊಳಿಸಿಕೊಳ್ಳಲು ಪ್ರಕೃತಿಯನ್ನು ಅಧೀನಗೊಳಿಸಿ ಬಳಸಿಕೊಳ್ಳುವುದು ಹೇಗೆ ಎಂಬಿತ್ಯಾದಿಗಳನ್ನು ವ್ಯಕ್ತಪಡಿಸುವ ತಾಂತ್ರಿಕ ಪರಿಭಾಷೆಗಳಷ್ಟೆ. ನಾಗರಿಕತೆಯಲ್ಲಿನ ಪ್ರಮುಖ ಪ್ರಗತಿಗಳು ಈ ರೀತಿಯ ಮನುಷ್ಯನ ಬುದ್ಧಿವಂತಿಕೆಯಿಂದ ಆಗಿವೆ. ಈ ಬುದ್ಧಿವಂತಿಕೆ ಅವನನ್ನು ಪ್ರಕೃತಿಯ ಅಧಿನನಾಗುವುದರಿಂದ ತಪ್ಪಿಸಿರುವುದಲ್ಲದೆ, ಅದರ ಶಕ್ತಿಯನ್ನು ತನ್ನ ಉದ್ದೇಶ ಪೂರೈಸಿಕೊಳ್ಳಲು ಹೇಗೆ ಬಳಸಿಕೊಳ್ಳಬೇಕೆಂಬುದನ್ನು ತಿಳಿದುಕೊಳ್ಳಲು ಸಹಾಯ ಮಾಡಿದೆ. ಮಗುವು ಬದುಕುತ್ತಿರುವ ಸಾಮಾಜಿಕ ಲೋಕವು ಈಗ ಎಷ್ಟು ಶ್ರೀಮಂತವಾಗಿದೆ ಮತ್ತು ಸಂಪೂರ್ಣವಾಗಿದೆಯೆಂದರೆ ಅದನ್ನು ಸಾಧಿಸಲು ಎದುರಿಸಿದ ಕಷ್ಟನಷ್ಟಗಳು, ಅದರ ಹಿಂದಿರುವ ಪ್ರಯತ್ನ ಮತ್ತು ಯೋಚನೆಗಳನ್ನು ಕಾಣಿಸುವುದು ಸುಲಭವಲ್ಲ. ಮನುಷ್ಯನ ಬಳಿ ಈಗ ಅದ್ಭುತವಾದ ಒಂದು ಸಿದ್ಧ ಸಾಧನವಿದೆ. ಮಗವನ್ನು ಈ ಸಿದ್ಧ ಸಂಪನ್ಮೂಲಗಳನ್ನು ಅರ್ಥವಾಗುವ ಸರಳ ಭಾಷೆಯಲ್ಲಿ ರೂಪಾಂತರಿಸಲು ಮುನ್ನಡೆಸಬಹುದು; ಬಳುವಳಿಯಾಗಿ ಬಂದ ಬಂಡವಾಳವಿಲ್ಲದೆ, ಉಪಕರಣಗಳಿಲ್ಲದೆ, ತಯಾರಿಸಲ್ಪಟ್ಟ ವಸ್ತುಗಳಿಲ್ಲದೆ ಮನುಷ್ಯನು ಪ್ರಕೃತಿಯೊಂದಿಗೆ ಮುಖಾಮುಖಿಯಾಗಿರುವುದನ್ನು ನೋಡಲು ಮುನ್ನಡೆಸಬಹುದು. ಮತ್ತು, ಮನುಷ್ಯನು ಯಾವ ಪ್ರಕ್ರಿಯೆಗಳ ಮೂಲಕ ತನ್ನ ಸಂದರ್ಭದ ಅವಶ್ಯಕತೆಗಳನ್ನು ಗುರುತಿಸಿ, ಅವುಗಳನ್ನು ನಿಭಾಯಿಸಲು ಸಾಧ್ಯವಾಗಿಸಿದ ಆಯುಧ ಮತ್ತು ಸಾಧನಗಳನ್ನು ಯೋಜಿಸಿದನು ಎನ್ನುವುದನ್ನು ಹಂತಹಂತವಾಗಿ ಅರಿಯಬಹುದು; ಮತ್ತು ಮುಂದೆ ಹೇಗೆ ಈ ಹೊಸ ಸಂಪನ್ಮೂಲಗಳು ಬೆಳವಣಿಗೆಯ ಹೊಸ ಕ್ಷಿತಿಜಗಳನ್ನು ತೆರೆದವು ಮತ್ತು ಹೊಸ ಸಮಸ್ಯೆಗಳನ್ನು ಸೃಷ್ಟಿಸಿದವು ಎಂಬುದನ್ನು ಕಲಿಯಬಹುದು. ಮನುಷ್ಯನ ಔದ್ಯಮಿಕ ಇತಿಹಾಸವು ಕೇವಲ ಐಹಿಕ ಅಥವಾ ಪ್ರಯೋಜನಾತ್ಮಕವಾದ ವ್ಯವಹಾರವಲ್ಲ. ಅದು ಬುದ್ಧಿಶಕ್ತಿಗೆ ಸಂಬಂಧಿಸಿದ್ದು. ಅದರ ದಾಖಲೆಯು ಮನುಷ್ಯನು ತನ್ನ ಜೀವನವನ್ನು ಸುಧಾರಿಸಲು ಅದರ ಸ್ಥಿತಿಗತಿಗಳನ್ನು ಸ್ವಲ್ಪಮಟ್ಟಿಗೆ ಪರಿಣಾಮಕಾರಿಯಾಗಿ ಬದಲಾಯಿಸಲು ಆಲೋಚಿಸಲು ಕಲಿತ ರೀತಿಯದ ಬಗ್ಗೆ ದಾಖಲೆಯಾಗಿದೆ. ಅದು ಒಂದು ನೈತಿಕ ದಾಖಲೆಯೂ ಹೌದು; ಮನುಷ್ಯರು ತಮ್ಮಉದ್ದೇಶಗಳನ್ನು ಪೂರೈಸಲು ಸ್ಥಿತಿಗತಿಗಳಲ್ಲಿ ಬದಲಾವಣೆಗಳನ್ನು ತಾಳ್ಮೆಯಿಂದ ತಂದಿದ್ದಾರೆ ಎಂಬುದರ ವಿವರವಾಗಿದೆ.

ವಾಸ್ತವವಾಗಿ ಮನುಷ್ಯರು ಹೇಗೆ ಬದುಕುತ್ತಾರೆ ಎಂಬ ಪ್ರಶ್ನೆಯು ಮಗು ಐತಿಹಾಸಿಕ ವಿಷಯದಲ್ಲಿ ಆಸಕ್ತಿಯನ್ನು ತೋರಿಸುವ ಪ್ರಧಾನ ಸಂಗತಿಯಾಗಿದೆ. ಈ ದೃಷ್ಟಿಕೋನವೇ ಮಗುವಿನೊಂದಿಗೆ ದೈನಂದಿನ ಸಂಬಂಧ ಹೊಂದಿರುವವರೊಂದಿಗೆ ಈ ಹಿಂದೆ ಬದುಕಿ ಹೋದವರನ್ನು ಹತ್ತಿರ ತರುತ್ತದೆ, ಮತ್ತು ಮಗುವು ಸಂಬಂಧಿಸಬಹುದಾದ ಒಳನೋಟಗಳನ್ನು ಅದಕ್ಕೆ ಕೊಡುಗೆಯಾಗಿ ನೀಡುತ್ತದೆ.

ಮನುಷ್ಯರು ಹಿಂದೆ ಬದುಕಿದ ಬಗೆ, ಅವರಿಗೆ ಬಳಸಲು ಲಭ್ಯವಿದ್ದ ಉಪಕರಣಗಳು, ಅವರು ಮಾಡಿದ ಹೊಸ ಆವಿಷ್ಕಾರಗಳು, ಆ ಮೂಲಕ ಲಭ್ಯವಾದ ಅಧಿಕಾರ ಮತ್ತು ವಿರಾಮದಿಂದ ಬದುಕಿನಲ್ಲಾದ ಬದಲಾವಣೆಗಳು ಮುಂತಾದವುಗಳನ್ನು ಅರಿಯಲು ಆಸಕ್ತಿ ಹೊಂದಿದ ಮಗುವು ಅಂತಹುದೇ ಆದ ಪ್ರಕ್ರಿಯೆಗಳನ್ನು ತನ್ನ ಕ್ರಿಯೆಗಳಲ್ಲಿ ಪುನರಾವರ್ತಿಸಲು, ಗೃಹೋಪಕರಣಗಳನ್ನು ಮರುರೂಪಿಸಲು, ಪ್ರಕ್ರಿಯೆಗಳನ್ನು ಮರುಸೃಷ್ಟಿಸಲು, ವಸ್ತುಗಳನ್ನು ತನ್ನದೇ ಆದ ಶೈಲಿಯಲ್ಲಿ ಬಳಸಲು ಉತ್ಸುಕನಾಗಿರುತ್ತಾನೆ. ಆಗಿನವರಿಗೆ ಎದುರಾದ ಅಡ್ಡಿಗಳು ಮತ್ತು ಅವರಿಗೆ ಪ್ರಕೃತಿಯಿಂದ ದೊರಕಿರಬಹುದಾದ ಸಂಪನ್ಮೂಲಗಳ ಬಗೆಗೆ ಕೇವಲ ನೋಡಿ ಅವರ ಸಮಸ್ಯೆಗಳು ಮತ್ತು

ಯಶಸ್ಸುಗಳನ್ನು ಮಗುವು ಅರ್ಥ ಮಾಡಿಕೊಳ್ಳುವುದರಿಂದ ಮಗುವಿಗೆ ಭೂಮಿ ಮತ್ತು ಅಡವಿ, ಕಡಲು ಮತ್ತು ಪರ್ವತಗಳು, ಸಸ್ಯ ಮತ್ತು ಪ್ರಾಣಿ ಲೋಕಗಳ ಬಗೆಗೆ ಆಸಕ್ತಿ ಹುಟ್ಟುತ್ತದೆ. ತಾನು ಅಧ್ಯಯನ ಮಾಡುತ್ತಿರುವ ಜನರು ಯಾವ ನೈಸರ್ಗಿಕ ವಾತಾವರಣದಲ್ಲಿ ಬದುಕಿದ್ದರೋ ಅದರ ಬಗ್ಗೆ ಕಲ್ಪನೆಯನ್ನು ಕಟ್ಟಿಕೊಂಡು, ಆ ಮೂಲಕ ಆ ಜನರ ಬದುಕಿನ ಬಗ್ಗೆ ಅರ್ಥ ಮಾಡಿಕೊಳ್ಳುತ್ತದೆ. ತನ್ನನ್ನು ಸುತ್ತುವರೆದಿರುವ ನೈಸರ್ಗಿಕ ಶಕ್ತಿಗಳು ಮತ್ತು ರೂಪಗಳೊಂದಿಗೆ ಒಡನಾಟದ ಮೂಲಕ ತಿಳುವಳಿಕೆಯನ್ನು ಗಿಟ್ಟಿಸಿಕೊಳ್ಳದ ಹೊರತು ಅದನ್ನು ಮಗುವು ಮರುಸೃಷ್ಟಿಸಲು ಸಾಧ್ಯವಿಲ್ಲ. ಮಗುವು ನಿಸರ್ಗದ ಮೇಲೆ ತಾನೇ ಸ್ವತಃ ನಡೆಸುತ್ತಿರುವ ಅಧ್ಯಯನಕ್ಕೆ ಇತಿಹಾಸದ ಬಗೆಗಿನ ಆಸಕ್ತಿಯು ಒಂದು ಮಾನವೀಯ ಬಣ್ಣವನ್ನು ಮತ್ತು ಹೆಚ್ಚಿನ ಮಹತ್ವವನ್ನು ಕೊಡುತ್ತದೆ. ನಿಸರ್ಗವನ್ನು ಕುರಿತ ಆತನ ಜ್ಞಾನವು ಇತಿಹಾಸದ ಅಧ್ಯಯನಕ್ಕೆ ಸಾರವನ್ನೂ, ಖಚಿತತೆಯನ್ನೂ ನೀಡುತ್ತದೆ. ಇದು ಇತಿಹಾಸ ಮತ್ತು ವಿಜ್ಞಾನದ ನಡುವಿನ ಒಂದು ಸಹಜ "ಸಹಸಂಬಂಧ"ವಾಗಿದೆ.

ಅದೇ ರೀತಿ, ಸಾಮಾಜಿಕ ಬದುಕಿನ ಮಹತ್ವದ ಬಗ್ಗೆ ಹೊಂದುತ್ತಿರುವ ಹೆಚ್ಚಿನ ಅರಿವು ಇತಿಹಾಸದ ಬೋಧನೆಯಲ್ಲಿ ಜೀವನಚರಿತ್ರೆಯ ಸ್ಥಾನವನ್ನು ನಿರ್ಧರಿಸುತ್ತದೆ. ನಿಸ್ಸಂಶಯವಾಗಿ ಆ ಚಾರಿತ್ರಿಕ ಸಂಗತಿಗಳನ್ನು ವ್ಯಕ್ತಿ ಓರ್ವನ ಕಥೆಯಾಗಿ, ಅದರಲ್ಲೂ ಒಬ್ಬ ಧಿರೋದಾತ್ತನ ಬದುಕು ಮತ್ತು ಕೃತ್ಯಗಳ ನಿರೂಪಣೆಯಾಗಿ ಪ್ರಸ್ತುತ ಪಡಿಸಿದರಂತೂ ಮಗುವಿಗೆ ಸ್ಪಷ್ಟವಾಗಿ ಮನಸ್ಸಿಗೆ ತಟ್ಟುತ್ತದೆ. ಆದರೂ, ಜೀವನಚರಿತ್ರೆಗಳನ್ನು ಅವು ಭಾವನೆಗಳನ್ನು ಕೆರಳಿಸಿ ಬೆರಗುಗೊಳಿಸುವ ಮಟ್ಟಿಗೆ, ಬಹುಶಃ ಕೇವಲ ಆಸಕ್ತಿದಾಯಕ ಕಥೆಗಳ ಸಂಗ್ರಹದಂತೆ ಬಳಸಬಹುದಾದರೂ ಸಹ ಮಗುವಿಗೆ ಸಾಮಾಜಿಕ ಜೀವನವನ್ನು ಗ್ರಹಿಸಲು ಅನುವು ಮಾಡಿಕೊಡುವುದಿಲ್ಲ. ಆ ಮಗುವು ಓದಿದ ಜೀವನ ಚರಿತ್ರೆಯ ಕಥಾನಾಯಕ ತನ್ನ ಸಾಮಾಜಿಕ ವಾತವರಣದಿಂದ ಪ್ರತೇಕವಾದಾಗ ಹಾಗೂ ಅವನ ಕೃತ್ಯಗಳಿಗೆ ಕಾರಣವಾದ ಸಾಮಾಜಿಕ ಸನ್ನಿವೇಶಗಳು ಮತ್ತು ಆ ಕೃತ್ಯಗಳಿಂದಾದ ಸಾಮಾಜಿಕ ಪ್ರಗತಿಗಳನ್ನು ಅನುಭವಿಸಲು ಮಗುವಿಗೆ ಅವಕಾಶವನ್ನು ಒದಗಿಸದೆ ಇದ್ದಾಗ ಇದು ಸಂಭವಿಸುತ್ತದೆ. ಒಂದು ವೇಳೆ ಜೀವನಚರಿತ್ರೆಯನ್ನು ಸಾಮಾಜಿಕ ಅವಶ್ಯಕತೆಗಳು ಮತ್ತು ಸಾಧನೆಗಳ ಒಂದು ಅರ್ಥಗರ್ಭಿತವಾದ ಸಾರಾಂಶದಂತೆ ಪ್ರಸ್ತುತಗೊಳಿಸಿದರೆ, ಒಂದು ವೇಳೆ ಮಗುವಿನ ಕಲ್ಪನೆಯು ಮನುಷ್ಯನೆದುರು ಹುಯಿಲೆಬ್ಬಿಸಿದ ಸಾಮಾಜಿಕ ನ್ಯೂನತೆಗಳು ಮತ್ತು ಸಮಸ್ಯೆಗಳನ್ನು, ಹಾಗೂ ಆತನು ಸಾಮಾಜಿಕ ತುರ್ತಿನ ಸಂದರ್ಭವನ್ನು ಎದುರಿಸಿದ ಬಗೆಯನ್ನು ಚಿತ್ರಿಸಿಕೊಳ್ಳಲು ಸಾಧ್ಯವಾದರೆ, ಆಗ ಅದು ಸಾಮಾಜಿಕ ಅಧ್ಯಯನದ ಒಂದು ಅಂಗವಾಗುತ್ತದೆ.

ಇತಿಹಾಸಕ್ಕೆ ಇರುವ ಸಾಮಾಜಿಕ ಧ್ಯೇಯದ ಪ್ರಜ್ಞೆಯು ಇತಿಹಾಸವನ್ನು ಪುರಾಣಗಳು, ಕಲ್ಪಾನಿಕ ಕಥೆಗಳು, ಮತ್ತು ಕೇವಲ ಸಾಹಿತ್ಯಿಕ ಕಥನಗಳಲ್ಲಿ ಮುಳುಗಿಸುವ ಪ್ರವೃತ್ತಿಯನ್ನು ತಡೆಯುತ್ತದೆ. ಇತಿಹಾಸದ ನಿಟ್ಟಿನಲ್ಲಿ ಪ್ರಾಥಮಿಕ ಹಂತದ ಪಠ್ಯಕ್ರಮವನ್ನು ಉತ್ತಮಗೊಳಿಸಲು ಹರ್ಬಾರ್ಶಿಯನ್ (Herbartian) ವೈಚಾರಿಕ ಪಂಥವು ನೆರವಾಗಿದ್ದರೂ ಇತಿಹಾಸ ಮತ್ತು ಸಾಹಿತ್ಯದ ನಡುವಣ ನಿಜವಾದ ಸಂಬಂಧವನ್ನು ಅದು ಅನೇಕ ವೇಳೆ ತಿರುವುಮುರುವಾಗಿಸಿದೆ. ಒಂದರ್ಥದಲ್ಲಿ ಅಮೇರಿಕದ ವಸಾಹತುಶಾಹಿ ಚರಿತ್ರೆ ಮತ್ತು ಡಿ ಫೋ (De Foe)ವಿನ *'ರಾಬಿನ್ಸನ್ ಕ್ರುಸೋ (Robinson Crusoe)'* ಗಳ ಪ್ರಮುಖ ಲಕ್ಷಣಗಳು ಒಂದೇ. ನಾಗರಿಕತೆಯ ಮೆಟ್ಟಿಲೇರಿ, ಸಲ್ಪ ಮಟ್ಟಿಗೆ ವೈಚಾರಿಕ ಪ್ರಬುದ್ಧತೆಯನ್ನು ಸಾಧಿಸಿದ, ಆದರ್ಶಗಳನ್ನು ಕಟ್ಟಿ, ಬೆಳೆಸಿ ಅವುಗಳನ್ನು ಕಾರ್ಯರೂಪಕ್ಕೆ ತರುವ ಮಾರ್ಗಗಳನ್ನು ಹುಡುಕಿದ ಮನುಷ್ಯನು ಹೇಗೆ ಒರಟಾದ ಮತ್ತು ಪ್ರತಿಕೂಲ ಪ್ರಕೃತಿಯೊಂದಿಗೆ ಸೆಣಸಾಡಲು ತನ್ನ ಬೌದ್ಧಿಕ

ಸಂಪನ್ಮೂಲಗಳ ಮೇಲೆ ಅವಲಂಬಿತನಾಗುವ ಪ್ರಸಂಗ ಬಂದಿತು, ಹಾಗೂ ಕೊನೆಯಲ್ಲಿ ತನ್ನ ಸ್ವಂತ ಬುದ್ಧಿವಂತಿಕೆ, ಶಕ್ತಿ ಮತ್ತು ಛಲದೊಂದಿಗೆ ಯಶಸ್ಸನ್ನು ಕಾಣಬೇಕಾಯಿತು ಎಂಬುದನ್ನೇ ಅವೆರಡೂ ನಿರೂಪಿಸುತ್ತವೆ. ಆದರೆ *'ರಾಬಿನ್ಸನ್ ಕ್ರುಸೋ'* ವನ್ನು ಮೂರು ಮತ್ತು ನಾಲ್ಕನೆಯ ತರಗತಿಯ ಮಗುವಿನ ಪಠ್ಯಕ್ರಮದೊಳಗೆ ಸೇರಿಸುವ ಮೂಲಕ ನಾವು ಗಾಡಿಯ ಹಿಂದೆ ಕುದುರೆಯನ್ನು ಕಟ್ಟಿದಂತಾಗುವುದಿಲ್ಲವೇ? ಅದೇ ರೀತಿಯ ಸಮಸ್ಯೆಗಳು ಮತ್ತು ಚಟುವಟಿಕೆಗಳನ್ನು ಹೊಂದಿದ ಒಂದು ನಿರ್ದಿಷ್ಟ ಸಂದರ್ಭಕ್ಕೆ ಒಂದು ಕಾಲ್ಪನಿಕ, ಆದರ್ಶೀಕೃತ ಕಥನ ರೂಪದಲ್ಲಿ *'ರಾಬಿನ್ಸನ್ ಕ್ರುಸೋ'*ವಿನ ಕಥೆಯನ್ನು ಒಂದು ಉದಾಹರಣೆಯಾಗಿ ಬಳಸಿಕೊಂಡು ಯಾಕೆ ಮಗುವಿಗೆ ವಾಸ್ತವವನ್ನು, ಅದರ ಇನ್ನೂ ವಿಸ್ತೃತ ರೂಪದಲ್ಲಿ, ಇನ್ನೂ ತೀವ್ರವಾದ ಶಕ್ತಿಗಳೊಂದಿಗೆ, ಇನ್ನೂ ನಿಚ್ಚಳ ಮತ್ತು ಬಹುಕಾಲ ಬಾಳುವ ಬದುಕಿನ ಮೌಲ್ಯಗಳೊಂದಿಗೆ ನೀಡಬಾರದು? ಮತ್ತು ಸಾಮಾನ್ಯವಾಗಿ ಅನಾಗರಿಕ ಬದುಕನ್ನು, ನಿರ್ದಿಷ್ಟವಾಗಿ ಉತ್ತರ ಅಮೇರಿಕಾದ ಇಂಡಿಯನ್ಸ್ (native American Indians – ಮೂಲನಿವಾಸಿಗಳು) ರನ್ನು ಅಧ್ಯಯನ ಮಾಡುವ ಪ್ರಯೋಜನ ಏನೇ ಇರಲಿ, ಅದನ್ನು **'ಹೈವಾಥಾ *(Hiawatha)*'** ಎನ್ನುವ ಪದ್ಯದ ಮೂಲಕ ಸುತ್ತುಬಳಸಿ ಅರಿತುಕೊಳ್ಳದೇ ನೇರವಾಗಿ ಅಧ್ಯಯನ ಮಾಡುಲು ಸಾಧ್ಯವಿಲ್ಲವೇ? ಮಗುವು ಈ ಮೊದಲೇ ಇನ್ನೂ ನಿರ್ದಿಷ್ಟವಾದ ರೂಪದಲ್ಲಿ ಅರಿತಿರುವ ಸಾಮಾಜಿಕ ಸ್ಥಿತಿಗತಿಗಳು ಮತ್ತು ಹೋಯ್ದಾಟಗಳ ಸರಣಿಗೆ ಒಂದು ಆದರ್ಶೀಕೃತ ಆಯಾಮವನ್ನು ನೀಡಲು ಕವಿತೆಯನ್ನು ಸುಲಭವಾಗಿ ಬಳಸುವುದೇಕೆ? ಸಾಮಾಜಿಕ ಬದುಕಿನಲ್ಲಿ ಇಂಡಿಯನ್ಸ್‌ರ ಬದುಕು ಕೆಲವು ಶಾಶ್ವತ ಪ್ರಶ್ನೆಗಳನ್ನು ಮತ್ತು ಅಂಶಗಳನ್ನು ಪ್ರಸ್ತುತ ಪಡಿಸಬೇಕು ಇಲ್ಲವಾದರೆ ಅದಕ್ಕೆ ಬೋಧನೆಯ ಯೋಜನೆಯಲ್ಲಿ ಯಾವ ಸ್ಥಾನವೂ ಇಲ್ಲ. ಅದಕ್ಕೆ ಅಂತಹದೊಂದು ಮೌಲ್ಯವಿದ್ದರೆ ಒಂದು ಶುದ್ಧ ಸಾಹಿತ್ಯಿಕ ಪ್ರಸ್ತುತಿಯ ಅತಿಸೂಕ್ಷ್ಮತೆ ಮತ್ತು ಸೌಂದರ್ಯದೊಳಗೆ ಕಳೆದು ಹೋಗುವಂತೆ ಮಾಡುವ ಬದಲು, ಅದನ್ನು ಅದರದ್ದೇ ಆಧಾರದ ಮೇಲೆ, ಹೇಗಿದೆಯೋ ಹಾಗೆ, ಎದ್ದುಕಾಣುವಂತೆ ಮಾಡಬೇಕು.

ಅದೇ ಕಾರಣ, ವೈಶಿಷ್ಟ್ಯಗಳು ಮತ್ತು ಸಾಮಾಜಿಕ ಸಂಬಂಧಗಳನ್ನು ಅವುಗಳು ಆಧರಿಸಿರುವ ಸಹಜ ಸಂದರ್ಭದೊಳಗೆ ಅರ್ಥಮಾಡಿಕೊಂಡರೆ ಇತಿಹಾಸದ ಬೋಧನೆಯಲ್ಲಿ ಕಾಲಾನುಕ್ರಮಕ್ಕೆ ಎಷ್ಟು ಮಹತ್ವ ಕೊಡಬೇಕು ಎಂಬುದನ್ನು ನಿರ್ಧರಿಸಲು ಅನುವಾಗುತ್ತದೆ ಎಂದು ನನಗನಿಸುತ್ತದೆ. ನಾಗರಿಕತೆಯು ಬೆಳೆದು ಬಂದ ಹಾದಿಯನ್ನು, ಅಂದರೆ ಅದು ಅನುಕ್ರಮವಾಗಿ ಯುಫ್ರೆಟೀಸ್ (Euphrates)ಮತ್ತು ನೈಲ್(Nile) ಕಣಿವೆಗಳಿಂದ ಆರಂಭಗೊಂಡು ಗ್ರೀಸ್, ರೋಮ್ ಇತ್ಯಾದಿಯಾಗಿ ಬೆಳೆದು ಬಂದ ಹಂತಗಳ ಮೂಲಕ ಮುಂದುವರೆದುಕೊಂಡು ಬಂದ ಹಾದಿಯನ್ನು ಅನುಸರಿಸುವ ಅಗತ್ಯತೆಯ ಬಗ್ಗೆ ಗಣನೀಯ ಪ್ರಮಾಣದಲ್ಲಿ ಇತ್ತೀಚೆಗೆ ಒತ್ತನ್ನು ನೀಡಲಾಗುತ್ತಿದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ವರ್ತಮಾನವು ಗತಕಾಲವನ್ನು ಅವಲಂಬಿಸಿರುತ್ತದೆ ಮತ್ತು ಗತಕಾಲದ ಪ್ರತಿಯೊಂದು ಹಂತವೂ ಅದರ ಹಿಂದಿನ ಕಾಲವನ್ನು ಅವಲಂಬಿಸಿರುತ್ತದೆ.

ಇಲ್ಲಿ ಇತಿಹಾಸಕ್ಕೆ ಸಂಬಂಧಿಸಿದಂತೆ ತಾರ್ಕಿಕ ಮತ್ತು ಮನೋವೈಜ್ಞಾನಿಕ ಅರ್ಥವಿವರಣೆಯ ನಡುವೆ ಇರುವ ಸಂಘರ್ಷವನ್ನು ನಮಗೆ ಪರಿಚಯಿಸಲಾಗುತ್ತದೆ. ನಮ್ಮ ಉದ್ದೇಶವು ಸಾಮಾಜಿಕ ಬದುಕು ಎಂದರೆ ಏನು ಮತ್ತು ಅದು ಹೇಗೆ ಸಾಗುತ್ತದೆ ಎಂಬುದನ್ನು ತಿಳಿದುಕೊಳ್ಳುವುದೇ ಆಗಿದ್ದರೆ, ಆಗ ಖಂಡಿತವಾಗಿಯೂ ಮಗುವು ತನ್ನ ವಾಸ್ತವಕ್ಕೆ ಸಂಬಂಧಿಸಬಹುದಾದ ಸಂಗತಿಗಳನ್ನು ತಿಳಿದುಕೊಳ್ಳಬೇಕೇ ವಿನಃ ದೂರದಲ್ಲಿರುವ ಸಂಗತಿಗಳ ಬಗ್ಗೆ ಅಲ್ಲ. ಬ್ಯಾಬಿಲಾನ್ (Babylon)ನ ಅಥವಾ ಈಜಿಪ್ಟ್‌ನ

ಬದುಕಿನ ಕುರಿತ ಸಮಸ್ಯೆಯು ಅವು ಸಾಮಾಜಿಕ ಜೀವನದ ಪ್ರಸ್ತುತ ಆಸಕ್ತಿ ಮತ್ತು ಗುರಿಗಳಿಗೆ ದೂರಸ್ಥವಾಗಿರುವುದಕ್ಕೆ ಸಂಬಂಧಿಸಿದೆಯೇ ಹೊರತು ಕಾಲದ ದೃಷ್ಟಿಯಿಂದ ದೂರಸ್ಥವಾಗಿದೆ ಎಂಬುದು ಅಲ್ಲ. ಅದು ಸಾಕಷ್ಟು ಸರಳೀಕರೀಸುವುದೂ ಇಲ್ಲ ಮತ್ತು ಸಾಮಾನ್ಯೀಕರೀಸುವುದೂ ಇಲ್ಲ; ಅಥವಾ, ಕನಿಷ್ಠಪಕ್ಷ ಹಾಗೆ ಮಾಡಿದರೂ ಸಹ ಅದನ್ನು ಸರಿಯಾದ ರೀತಿಯಲ್ಲಿ ಮಾಡುವುದಿಲ್ಲ. ಈ ಅಂಶಗಳಿಗೆ ದ್ವಿತೀಯ ಸ್ಥಾನವನ್ನು ನೀಡಿ ಪ್ರಸ್ತುತ ಪಡಿಸುವ ಬದಲು, ಈ ಕಾಲಕ್ಕೆ ಮುಖ್ಯವಾದುದ್ದನ್ನು ಕಡೆಗಣಿಸುತ್ತದೆ. ಅದರ ಪ್ರಮುಖ ಲಕ್ಷಣಗಳನ್ನು ಪರಿಣಿತರೂ ಸಹ ಕಂಡುಕೊಳ್ಳುವುದು ಮತ್ತು ಅರ್ಥಮಾಡಿಕೊಳ್ಳುವುದು ಕಷ್ಟ. ಇದು ನಿಸ್ಸಂದೇಹವಾಗಿ ನಂತರದ ಬದುಕಿಗೆ ಕಾರಣವಾದ ಅಂಶಗಳನ್ನು ಒದಗಿಸುತ್ತದೆ, ಮತ್ತು  ಯಾವುದು ಕಾಲದ ಹರಿವಿನಲ್ಲಿ ಘಟಿಸಿದ ಸಂಗತಿಗಳನ್ನು ಬದಲಾಯಿಸಿತೋ ಅದನ್ನು  ಪ್ರಸ್ತುತಪಡಿಸುತ್ತದೆ. ಆದರೆ ಮಗುವು ಅಮೂರ್ತ ಕಾರಣಗಳನ್ನು ಮತ್ತು ವಿಶೇಷ ಪರಿಣಿತಿಯಿಂದ ಕೂಡಿದ ಕೊಡುಗೆಗಳನ್ನು ಮೆಚ್ಚಿಕೊಳ್ಳುವ ಒಂದು ಹಂತಕ್ಕೆ ಇನ್ನೂ ಬಂದಿರುವುದಿಲ್ಲ. ಮಗುವಿಗೆ ಅಗತ್ಯವಾಗಿ ನೀಡಬೇಕಾಗಿರುವುದು ವಿಶಿಷ್ಟ ಸಂಬಂಧಗಳು, ಸ್ಥಿತಿಗತಿಗಳು ಮತ್ತು ಚಟುವಟಿಕೆಗಳ  ಒಂದು ಚಿತ್ರ. ಈ ನಿಟ್ಟಿನಲ್ಲಿ, ಬ್ಯಾಬಿಲಾನ್‌ನ ಅಥವಾ ಈಜಿಪ್ಟ್‌ನ ಸಂಕೀರ್ಣವಾದ ಮತ್ತು ಮಾನವನಿರ್ಮಿತ (artificial) ಬದುಕಿಗಿಂತ ಪ್ರಾಗೈತಿಹಾಸಿಕ ಬದುಕೇ ಮಗುವಿಗೆ ಹೆಚ್ಚು ಹತ್ತಿರವಾಗಿರುತ್ತದೆ. ಮಗುವೊಂದು ಸಂಸ್ಥೆಗಳ ಮಹತ್ವವನ್ನು ಅರ್ಥಮಾಡಿಕೊಳ್ಳುವ ಸಾಮರ್ಥ್ಯವನ್ನು ಹೊಂದಿದ ನಂತರ ಪ್ರತಿಯೊಂದು ಐತಿಹಾಸಿಕ ರಾಷ್ಟ್ರವೂ ಯಾವ ಬಗೆಯ ವಿಶೇಷ ಸಾಂಸ್ಥಿಕ ವಿಚಾರಗಳನ್ನು ಪ್ರತಿನಿಧಿಸುತ್ತದೆ ಎಂಬುದನ್ನು ಮತ್ತು ಇವತ್ತಿನ ಸಂಕೀರ್ಣವಾದ ಸಾಂಸ್ಥಿಕ ಸಂರಚನೆಗಳಿಗೆ ಅದು ಯಾವ ಕೊಡುಗೆಯನ್ನಿತ್ತಿದೆ ಎಂಬುದನ್ನೂ  ಕಾಣಬಲ್ಲದು. ಆದರೆ ಮಗುವು ಈ ಹಂತವನ್ನು ತಲುಪಬೇಕೆಂದರೆ ಅದು ಇತರ ಕ್ಷೇತ್ರಗಳಲ್ಲಿಯೂ ಕಾರಣಗಳನ್ನು ಪ್ರತ್ಯೇಕಿಸಿ ಗ್ರಹಿಸಲು ಸಮರ್ಥನಾಗಬೇಕು, ಅಂದರೆ ಮಗುವು ಮಾಧ್ಯಮಿಕ ಹಂತದ ಶಿಕ್ಷಣವನ್ನು ತಲುಪಿದಾಗ ಮಾತ್ರ ಅದು ಸಾಧ್ಯವಾಗುತ್ತದೆ.

ಈ ಒಂದು ಸಾಮಾನ್ಯ ಯೋಜನೆಯಲ್ಲಿ ಮೂರು ಕಾಲಘಟ್ಟಗಳನ್ನು ಅಥವಾ ಹಂತಗಳನ್ನು ಗುರುತಿಸಲಾಗುತ್ತದೆ: ಮೊದಲನೆಯದು, ಸಾಮಾನ್ಯೀಕೃತ ಮತ್ತು ಸರಳೀಕೃತ ಇತಿಹಾಸ – ಸ್ಥಳೀಯ ಅಥವಾ ಕಾಲಾನುಕ್ರಮಣಿಕೆಯ ದೃಷಿಯಿಂದ ಇದು ಇತಿಹಾಸವೇ ಅಲ್ಲ, ಆದರೆ ಮಗುವಿಗೆ ವಿವಿಧ ಸಾಮಾಜಿಕ ಚಟುವಟಿಕೆಗಳ ಬಗ್ಗೆ ಒಂದು ಒಳನೋಟವನ್ನು ಕೊಡುವ ಮತ್ತು ಅದರೊಂದಿಗೆ ಸಂಬಂಧ ಕಲ್ಪಿಸುವ ಗುರಿಯನ್ನು ಹೊಂದಿರುತ್ತದೆ. ಈ ಅವಧಿಯು  ಆರು ವರ್ಷದ ಮಕ್ಕಳು ಪ್ರಸ್ತುತ  ದೇಶದ ಮತ್ತು ನಗರದಲ್ಲಿನ  ಜನರ ಉದ್ಯೋಗವನ್ನು ಅಧ್ಯಯನ ಮಾಡುವ, ಏಳು ವರ್ಷದ ಮಕ್ಕಳು ಆವಿಷ್ಕಾರಗಳ ವಿಕಸನ ಮತ್ತು ಜೀವನದ ಮೇಲೆ ಅವುಗಳ ಪರಿಣಾಮಗಳನ್ನು ಅರ್ಥೈಸಿಕೊಳ್ಳುವ ಹಾಗೂ ಗೋಲಾಕಾರದ ಇಡೀ ಪ್ರಪಂಚದ ಸಂಗತಿಗಳನ್ನು ಮಾನವನ ಅರಿವಿಗೆ ತಂದಿರುವ ವಲಸೆ, ಪರಿಶೋಧನೆ, ಮತ್ತು ಅನ್ವೇಷಣೆಗಳಂತಹ ಮಹಾನ್ ಪ್ರಯತ್ನಗಳನ್ನು ಎಂಟು ವರ್ಷದ ಪ್ರಾಯದ ಮಕ್ಕಳು ಅರಿತುಕೊಳ್ಳುವುದನ್ನು ಒಳಗೊಂಡಿರುತ್ತದೆ. ಸ್ಪಷ್ಟವಾಗಿ ಮೊದಲ ಎರಡು ಅವಧಿಗಳ ಕೆಲಸವು ಯಾವುದೇ ನಿರ್ದಿಷ್ಟ ಜನಾಂಗ ಅಥವಾ ನಿರ್ದಿಷ್ಟ ವ್ಯಕ್ತಿಯ ಬಗೆಗೆ, ಅಂದರೆ ನಿರ್ದಿಷ್ಟವಾಗಿ ಯಾವುದೇ ಚಾರಿತ್ರಿಕ ವಿವರಗಳ ಬಗೆಗೆ ತಿಳುವಳಿಕೆಯನ್ನು ಮೂಡಿಸುವುದಿಲ್ಲ. ಆದರೆ ಅದೇ ಸಮಯದಲ್ಲಿ  ವ್ಯಕ್ತಿಗತ ಅಂಶಗಳನ್ನು ನಾಟಕೀಯ ರೂಪದಲ್ಲಿ ಪರಿಚಯಿಸುವುದಕ್ಕೆ ಬಹಳಷ್ಟು ಅವಕಾಶ ಸಿಗುತ್ತದೆ. ಮಹಾನ್ ಪರಿಶೋಧಕರು ಮತ್ತು ಅನ್ವೇಷಕರ ಬಗೆಗಿನ ವಿವರಗಳು ಕೆಲವು ನಿರ್ದಿಷ್ಟ ಕಾಲ ಮತ್ತು ಸ್ಥಳಗಳಲ್ಲಿ

ವಾಸಿಸುತ್ತಿದ್ದ ಕೆಲವು ನಿರ್ದಿಷ್ಟ ವ್ಯಕ್ತಿಗಳ ಮೇಲೆ ಅವಲಂಬಿತವಾಗಿರುವ ಸ್ಥಳೀಯ ಮತ್ತು ನಿರ್ದಿಷ್ಟ ಅಂಶಗಳ ಬಗ್ಗೆ ತಿಳಿದುಕೊಳ್ಳಲು ಮಗುವಿಗೆ ಅನುವು ಮಾಡಿಕೊಡುತ್ತದೆ.

ಇದು ನಮಗೆ ಎರಡನೆಯ ಅವಧಿಯನ್ನು ಪರಿಚಯಿಸುತ್ತದೆ. ಸೀಮಿತ ಮತ್ತು ಸಕಾರಾತ್ಮಕ ಸಂಗತಿಗಳನ್ನು ಗ್ರಹಿಸುವ ಮಗುವಿನ ಶಕ್ತಿಯ ಬೆಳವಣಿಗೆಗೆ ಅನುಗುಣವಾಗಿ ನಿರ್ದಿಷ್ಟ ಜನಸಮುದಾಯಗಳ ಸ್ಥಳೀಯ ಪರಿಸ್ಥಿತಿಗಳು ಮತ್ತು ನಿರ್ದಿಷ್ಟ ಚಟುವಟಿಕೆಗಳು ಪ್ರಾಮುಖ್ಯತೆ ಪಡೆಯುತ್ತವೆ. ಶಿಕಾಗೋ, ಅಮೇರಿಕ ಇವೆಲ್ಲ, ಸ್ವಾಭಾವಿಕವಾಗಿ ಮಗುವು ಬಹಳ ಪರಿಣಾಮಕಾರಿಯಾಗಿ ಅರ್ಥಮಾಡಿಕೊಳ್ಳಬಹುದಾದ ಪ್ರದೇಶಗಳಾಗಿರುವುದರಿಂದ ಮುಂದಿನ ಮೂರು ವರ್ಷಗಳ ವಿಷಯಗಳನ್ನು ನೇರವಾಗಿ ಅಥವಾ ಪರೋಕ್ಷವಾಗಿ ಈ ಮೂಲದಿಂದಲೇ ಆಯ್ದುಕೊಳ್ಳಲಾಗುತ್ತದೆ. ಇಲ್ಲಿ ಮತ್ತೆ ಮೂರನೇ ವರ್ಷದಲ್ಲಿ ಅಮೇರಿಕದ ಜನರ ಜೀವನದೊಂದಿಗೆ ಯುರೋಪಿನ ಜನರ ಜೀವನವನ್ನು ಗಣನೆಗೆ ತೆಗೆದುಕೊಳ್ಳುವುದರಿಂದ ಅದೊಂದು ಬದಲಾವಣೆಯ ವರ್ಷವಾಗಿದೆ. ಈ ಹೊತ್ತಿಗೆ ಮಗುವು ಸಾಮಾನ್ಯವಾಗಿ ಸಾಮಾಜಿಕ ಬದುಕನ್ನೊ ಅಥವಾ ತನಗೆ ಸುಪರಿಚಿತವಾಗಿರುವ ಸಾಮಾಜಿಕ ಬದುಕನ್ನೊ ಅರ್ಥಮಾಡಿಕೊಳ್ಳುವುದು ಅಲ್ಲ, ಬದಲಾಗಿ ಕೆಲವು ಸಂಪೂರ್ಣವಾಗಿ ಭಿನ್ನವಾದ ಮತ್ತು ವಿಲಕ್ಷಣ ಪ್ರಕಾರಗಳ ಸಾಮಾಜಿಕ ಬದುಕುಗಳು, ಪ್ರತಿಯೊಂದು ವಿಶಿಷ್ಟ ಮಹತ್ವದೊಂದಿಗೆ ಮತ್ತು ಇಡೀ ವಿಶ್ವ ಇತಿಹಾಸಕ್ಕೆ ಅದು ನೀಡಿರುವ ಕೊಡುಗೆಯೊಂದಿಗೆ ಅರ್ಥಮಾಡಿಕೊಳ್ಳಲು ಸಿದ್ಧವಾಗಿರಬೇಕು. ಅಂತೆಯೇ ಮುಂದಿನ ಅವಧಿಯಲ್ಲಿ ಕಾಲಾನುಕ್ರಮಣಿಕೆಯ ಕ್ರಮವನ್ನು ಅನುಸರಿಸಲಾಗುತ್ತದೆ. ಇದು ಮೆಡಿಟರೇನಿಯನ್ನಿನ ಪುರಾತನ ಜಗತ್ತಿನಿಂದ ಪ್ರಾರಂಭವಾಗಿ ಯುರೋಪಿನ ಇತಿಹಾಸದ ಮೂಲಕ ಅಮೇರಿಕದ ಇತಿಹಾಸದ ವಿಶಿಷ್ಟ ಮತ್ತು ವಿಭಿನ್ನ ಅಂಶಗಳನ್ನು ಪರಿಚಯಿಸುತ್ತದೆ.

ಈ ಯೋಜನೆಯೊಂದೇ ಸಮಸ್ಯೆಯನ್ನು ಬಗೆಹರಿಸವ ಏಕೈಕ ಮಾರ್ಗವಾಗಿ ಪ್ರಸ್ತುತ ಪಡಿಸಿಲ್ಲ, ಬದಲಾಗಿ ಇದು ಒಂದು ಕೊಡುಗೆ ಎಂದು ತಿಳಿಯಬಹುದು; ಈ ಫಲಿತವು, ಬರಿಯ ಆಲೋಚನೆಯಿಂದ ಬಂದದ್ದಲ್ಲ; ಬದಲಾಗಿ ಗಣನೀಯ ಪ್ರಮಾಣದ ಪ್ರಯೋಗಗಳ ಮೂಲಕ ವರ್ಷದಿಂದ ವರ್ಷಕ್ಕೆ ವಿಷಯಗಳನ್ನು ಬದಲಿಸುತ್ತ ಮಗುವಿನ ಆಸಕ್ತಿಯನ್ನು ಹಿಡಿದಿಡುವಂತಹ ಓದಿನ ವಿಷಯವನ್ನು ನೀಡಲು ಶ್ರಮಿಸುವ ಜೊತೆಗೆ ಸಾಮಾಜಿಕ ಜೀವನದ ತತ್ವಗಳು ಮತ್ತು ವಾಸ್ತವಗಳ ಬಗ್ಗೆ ಸಂಪೂರ್ಣವಾದ ಮತ್ತು ನಿಖರವಾದ ಜ್ಞಾನವನ್ನು ಪಡೆಯಲು ಹಂತ ಹಂತವಾಗಿ ಮುನ್ನಡೆಸುತ್ತ, ನಂತರದ ವಿಶೇಷವಾದ ಐತಿಹಾಸಿಕ ಅಧ್ಯಯನಗಳಿಗೆ ತಯಾರಿ ಮಾಡುತ್ತ, ಈ ಫಲಿತವನ್ನು ಪಡೆಯಲಾಗಿದೆ.

(Source: John Dewey, The School and Society (Delhi, Aakar Books, 2008)
(originally published in 1915)